

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಸಂಖ್ಯೆ : 1251

ಸದಸ್ಯರ ಹೆಸರು : ಶ್ರೀ ಪುಟ್ಟಣ್ಣ (ಶಿಕ್ಷಕರ ಕ್ಷೇತ್ರ).

ಉತ್ತರಿಸಬೇಕಾದ ದಿನಾಂಕ : 23-12-2021.

ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿ.

<table>
<tr><th>ಕ್ರ.ಸಂ.</th><th>ಪ್ರಶ್ನೆಗಳು</th><th>ಉತ್ತರಗಳು</th></tr>
<tr><td>ಅ.</td><td>ರಾಜ್ಯದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಡಿಯಲ್ಲಿ ಯಾವ ಯಾವ ಶಾಲಾ ಕಾಲೇಜುಗಳನ್ನು ನಡೆಸಲಾಗುತ್ತಿದೆ; (ವಿವರ ನೀಡುವುದು)</td><td>ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯದಡಿ ಕಾರ್ಯ ನಿರ್ವಹಿಸುತ್ತಿರುವ ವಿವಿಧ ಶಾಲಾ-ಕಾಲೇಜುಗಳ ವಿವರಗಳನ್ನು "ಅನುಬಂಧ-01"ರಲ್ಲಿ ನೀಡಲಾಗಿದೆ.</td></tr>
<tr><td>ಆ.</td><td>ಸದರಿ ಶಾಲಾ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಬೋಧಕೇತರರ ಸಂಖ್ಯೆ ಎಷ್ಟು; (ವಿವರ ನೀಡುವುದು)</td><td>ಅಲ್ಪಸಂಖ್ಯಾತರ ವಸತಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ/ ಬೋಧಕೇತರ ಸಿಬ್ಬಂದಿಗಳ ವಿವರ:
<table>
<tr><th>ಕ್ರ. ಸಂ</th><th>ವಸತಿ ಶಾಲೆ</th><th>ಬೋಧಕ/ ಬೋಧಕೇತರ ಸಿಬ್ಬಂದಿಗಳ ಸಂಖ್ಯೆ</th></tr>
<tr><td>1</td><td>ಮೊರಾರ್ಜಿದೇಸಾಯಿ ವಸತಿ ಶಾಲೆ</td><td>736</td></tr>
<tr><td>2</td><td>ಮೊರಾರ್ಜಿದೇಸಾಯಿ ವಸತಿ ಪದವಿ ಪೂರ್ವಕಾಲೇಜು</td><td>91</td></tr>
<tr><td>3</td><td>ಮಾದರಿ ವಸತಿ ಶಾಲೆ (ನವೋದಯ)</td><td>43</td></tr>
<tr><td>4</td><td>ಸರ್ಕಾರಿ ಮುಸ್ಲಿಂ ವಸತಿ ಶಾಲೆ</td><td>64</td></tr>
<tr><td>5</td><td>ಮೌಲಾನಾ ಆಜಾದ್ ಮಾದರಿ ಶಾಲೆ</td><td>88</td></tr>
<tr><td></td><td>ಒಟ್ಟು</td><td>1022</td></tr>
</table></td></tr>
<tr><td>ಇ.</td><td>ಸದರಿ ಸಿಬ್ಬಂದಿಯವರಿಗೆ ನೇಮಕಗೊಂಡ ದಿನಾಂಕದಿಂದ ಇದುವರೆವಿಗೆ ವೃಂದ ಮತ್ತು ನೇಮಾಕಾತಿ ನಿಯಮಗಳನ್ನು ಮಾಡದಿರಲು ಕಾರಣಗಳೇನು;</td><td>ಅಲ್ಪಸಂಖ್ಯಾತರ ಮೊರಾರ್ಜಿದೇಸಾಯಿ ವಸತಿ ಶಾಲೆಗಳಲ್ಲಿನ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ಈಗಾಗಲೇ ಸರ್ಕಾರದ ಅಧಿಸೂಚನೆ ದಿನಾಂಕ:15.03.2011ರಲ್ಲಿ ರಚಿಸಲಾಗಿರುತ್ತದೆ.<br><br>ಇನ್ನುಳಿದ 1. ಮೊರಾರ್ಜಿದೇಸಾಯಿ ವಸತಿ ಪದವಿ ಪೂರ್ವಕಾಲೇಜು 2. ಮಾದರಿ ವಸತಿ ಶಾಲೆ (ನವೋದಯ) 3. ಮೌಲಾನಾ ಆಜಾದ್ ಮಾದರಿ ಶಾಲೆಗಳಲ್ಲಿನ ಬೋಧಕ/ಬೋಧಕೇತರ ಹುದ್ದೆಗಳನ್ನು ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೇರ್ಪಡೆಗೊಳಿಸಿ ವೃಂದ ಮತ್ತು ನೇಮಕಾತಿ ನಿಯಮಗಳ ಪರಿಷ್ಕರಣೆಗಾಗಿ ಪ್ರಸ್ತಾವನೆಯನ್ನು ದಿನಾಂಕ:10.07.2018 ರಂದು ಸರ್ಕಾರಕ್ಕೆ ಸಲ್ಲಿಸಲಾಯಿತು. ತದನಂತರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಸಂಸದೀಯ ವ್ಯವಹಾರಗಳ ಇಲಾಖೆ ಮತ್ತು ಆರ್ಥಿಕ ಇಲಾಖೆಯಿಂದ ಕೋರಲಾದ ಸ್ಪಷ್ಟೀಕರಣದೊಂದಿಗೆ ವೃಂದ ಮತ್ತು ನೇಮಕಾತಿ ನಿಯಮಗಳ ಪರಿಷ್ಕರಣೆ ಪ್ರಸ್ತಾವನೆಯು ಆರ್ಥಿಕ ಇಲಾಖೆಯ ಪರಿಶೀಲನೆಯಲ್ಲಿದೆ.</td></tr>
<tr><td>ಈ.</td><td>ವೃಂದ ಮತ್ತು ನೇಮಕಾತಿ ನಿಯಮ ಮಾಡದಿರುವುದರಿಂದ, ಸದರಿ ಇಲಾಖೆಯಿಂದ ಹಲವಾರು ಸಿಬ್ಬಂದಿಗೆ ಬಡ್ತಿ ಇಲ್ಲದೆ ಅನ್ಯಾಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಮಾಡಲಾಗುವುದು;</td><td>-ಬಂದಿರುತ್ತದೆ-</td></tr>
</table>

| | | |
|---|---|---|
| ಉ. | ಸದರಿ ಇಲಾಖೆಯಲ್ಲಿ ಬಡ್ತಿಗಾಗಿ ಯಾವ ಯಾವ ಎಷ್ಟು ಹುದ್ದೆಗಳನ್ನು ಉಳಿಸಿಕೊಳ್ಳಲಾಗಿದೆ? (ವಿವರ ನೀಡುವುದು) | ಪ್ರಸ್ತುತ 2011ರ ವೃಂದ ಮತ್ತು ನೇಮಕಾತಿ ನಿಯಮಗಳು ಚಾಲ್ತಿಯಲ್ಲಿರುವುದರಿಂದ ಇದರಲ್ಲಿ 2011ರ ನಂತರ ಹೊಸದಾಗಿ ಸೃಜಿಸಿ ಮಂಜೂರಾಗಿರುವ ಸುಮಾರು 50 ವಿವಿಧ ವೃಂದಗಳ ಹುದ್ದೆಗಳು ಸೇರ್ಪಡೆಯಾಗಿರುವುದಿಲ್ಲ ಹಾಗೂ ಪರಿಷ್ಕೃತ ವೃಂದ ಮತ್ತು ನೇಮಕಾತಿ ನಿಯಮಗಳು ರಚನೆಯಾಗಿಲ್ಲದ ಕಾರಣ ನೇರ ನೇಮಕಾತಿ ಮತ್ತು ಮುಂಬಡ್ತಿಗಾಗಿ ಕಾಯ್ದಿರಿಸಲಾದ ಹುದ್ದೆಗಳ ಅನುಪಾತ ಮತ್ತು ಹುದ್ದೆಗಳ ಸಂಖ್ಯೆಗಳ ವಿವರಗಳು ಅಂತಿಮಗೊಂಡಿರುವುದಿಲ್ಲ. ಆದ್ದರಿಂದ ಮುಂಬಡ್ತಿಗಾಗಿ ಹುದ್ದೆಗಳನ್ನು ಕಾಯ್ದಿರಿಸಿರುವುದಿಲ್ಲ. |

ಸಂಖ್ಯೆ: **MWD 318 LMQ 2021**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ